# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ 1714

ಸದಸ್ಯರ ಹೆಸರು ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ಸಚಿವರು ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

ಉತ್ತರಿಸಬೇಕಾದ ದಿನಾಂಕ 19/03/2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕೊಡಗು ಜಿಲ್ಲೆಯಲ್ಲಿ ಜೇನು ಕೃಷಿಗೆ ವಿಫುಲ ಅವಕಾಶಗಳಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಬಂದಿದ್ದಲ್ಲಿ, ಜಿಲ್ಲೆಯಲ್ಲಿ ಜೇನು ಕೃಷಿಯನ್ನು ಉತ್ತೇಜಿಸಲು ಸರ್ಕಾರ ಕೈಗೊಂಡಿರುವ ಕಾರ್ಯಕ್ರಮ ಮತ್ತು ಯೋಜನೆಗಳೇನು; | ಜಿಲ್ಲೆಯಲ್ಲಿ ಜೇನುಕೃಷಿಯನ್ನು ಉತ್ತೇಜಿಸಲು ವಿವಿಧ ಯೋಜನೆಗಳಡಿ ಕೈಗೊಂಡಿರುವ ಕಾರ್ಯಕ್ರಮಗಳು ಈ ಕೆಳಕಂಡಂತಿವೆ.<br><br>1. ಮಧುವನ ಮತ್ತು ಜೇನುಸಾಕಾಣೆ ಯೋಜನೆ - ರಾಜ್ಯವಲಯ<br><br>i. ಕೌಶಲ್ಯ ಆಧಾರಿತ ತರಬೇತಿ ಕಾರ್ಯಕ್ರಮ.<br>ii. ಜೇನು ಪೆಟ್ಟಿಗೆ, ಕುಟುಂಬ ಮತ್ತು ಸ್ಟ್ಯಾಂಡ್ ಖರೀದಿಗೆ ಸಹಾಯಧನ.<br>iii. ಖಾಸಗಿ ಮಧುವನಗಳ ಸ್ಥಾಪನೆಗೆ ಸಹಾಯಧನ.<br>iv. ಜಿಲ್ಲೆಯ ಹಾಗೂ ರಾಜ್ಯದ ಜೇನು ಕೃಷಿ ಆಸಕ್ತರಿಗೆ ಜೇನು ಕೃಷಿಯ ಕುರಿತಂತೆ ಹೆಚ್ಚಿನ ಅರಿವು ನೀಡುವ ಸಲುವಾಗಿ ಭಾಗಮಂಡಲದ ಜೇನು ಕೃಷಿ ತರಬೇತಿ ಕೇಂದ್ರದಲ್ಲಿ ಜೇನು ಮ್ಯೂಸಿಯಂ ಅಭಿವೃದ್ಧಿ ಪಡಿಸಿ, ತರಬೇತಿ ಕೇಂದ್ರವನ್ನು ನವೀಕರಿಸಲಾಗಿರುತ್ತದೆ.<br>v. ಭಾಗಮಂಡಲದ ಜೇನುಗಾರಿಕೆ ತರಬೇತಿ ಕೇಂದ್ರದಲ್ಲಿ ಆಸಕ್ತ ರೈತ ಮಕ್ಕಳಿಗೆ 3 ತಿಂಗಳ ಅವಧಿಯ ವಸತಿ ಸಹಿತ ಜೇನು ಕೃಷಿ ತರಬೇತಿ ನೀಡಲಾಗುತ್ತಿದೆ.<br><br>2. ಜೇನುಸಾಕಾಣಿಕೆ ಯೋಜನೆ - ಜಿಲ್ಲಾವಲಯ<br><br>i. ಕೌಶಲ್ಯ ಆಧಾರಿತ ತರಬೇತಿ ಕಾರ್ಯಕ್ರಮ.<br><br>ii. ಜೇನು ಪೆಟ್ಟಿಗೆ, ಕುಟುಂಬ ಮತ್ತು ಸ್ಟ್ಯಾಂಡ್ ಖರೀದಿಗೆ ಸಹಾಯಧನ.<br>3 .ರಾಷ್ಟ್ರೀಯ ತೋಟಗಾರಿಕೆ ಮಿಷನ್ (MIDH) - ಕೇಂದ್ರವಲಯ<br><br>i. ಜೇನು ಪೆಟ್ಟಿಗೆ ಮತ್ತು ಕುಟುಂಬ ಖರೀದಿಗೆ ಸಹಾಯಧನ. |

| | | |
|---|---|---|
| | | ii. ಜೇನು ತೆಗೆಯುವ ಯಂತ್ರ ಖರೀದಿಗೆ ಸಹಾಯಧನ.<br><br>4. ತೋಟಗಾರಿಕೆ ಇಲಾಖೆಯ ವತಿಯಿಂದ ಶ್ರೀ ಭಗಂಡೇಶ್ವರ ತೋಟಗಾರಿಕೆ ರೈತ ಉತ್ಪಾದಕ ಕಂಪನಿ.ಲಿ ಅನ್ನು ಸ್ಥಾಪಿಸಿದ್ದು, ಸಂಸ್ಥೆಯ ಸದಸ್ಯ ರೈತರಿಗೆ ಜೇನುಕೃಷಿ ತಾಂತ್ರಿಕ ತರಬೇತಿಗಳನ್ನು ಕೃಷಿ ವಿಜ್ಞಾನ ಕೇಂದ್ರದ ಮೂಲಕ ಆಯೋಜಿಸಲಾಗಿದೆ. ಸಂಸ್ಥೆಯ ಸದಸ್ಯ ರೈತರುಗಳು ಸ್ಥಳೀಯವಾಗಿ ಉತ್ಪಾದಿಸುವ ಜೇನು ತುಪ್ಪವನ್ನು ಸಂಸ್ಥೆಯು ತನ್ನ ಬ್ರಾಂಡ್ ಮೂಲಕ ಮಾರಾಟ ಮಾಡುತ್ತಿದ್ದು, ಜೇನು ಉತ್ಪನ್ನಗಳ ಮಾರಾಟಕ್ಕೆ ನೆರವಾಗುತ್ತಿದೆ. |
| (ಇ) | ಜಿಲ್ಲೆಯಲ್ಲಿ ಎಷ್ಟು ನೊಂದಾಯಿತ ಜೇನು ಕೃಷಿಕರು ಮತ್ತು ಸಹಕಾರ ಸಂಸ್ಥೆಗಳಿವೆ; | ಜಿಲ್ಲೆಯಲ್ಲಿ ವಿವಿಧ ಜೇನು ಕೃಷಿ ಅಭಿವೃದ್ಧಿ ಯೋಜನೆಗಳಡಿ ಸವಲತ್ತುಗಳನ್ನು ಪಡೆದ ಒಟ್ಟು 2600 ನೊಂದಾಯಿತ ಜೇನು ಕೃಷಿಕರು ಮತ್ತು 2 ಸಹಕಾರ ಸಂಸ್ಥೆಗಳಿವೆ. |
| (ಈ) | ಜಿಲ್ಲೆಯಲ್ಲಿನ ಸದರಿ ನೊಂದಾಯಿತ ಜೇನುಕೃಷಿಕರು ಮತ್ತು ಸಹಕಾರ ಸಂಸ್ಥೆಗಳಿಗೆ ಕಳೆದ ಮೂರು ವರ್ಷಗಳಲ್ಲಿ ಸರ್ಕಾರದಿಂದ ದೊರೆತಿರುವ ನೆರವು ಹಾಗೂ ಸೌಲಭ್ಯಗಳೇನು? (ಸಂಪೂರ್ಣ ವಿವರ ನೀಡುವುದು) | ಜಿಲ್ಲೆಯಲ್ಲಿನ ನೊಂದಾಯಿತ ಜೇನು ಕೃಷಿಕರಿಗೆ ಕಳೆದ ಮೂರು ವರ್ಷಗಳಲ್ಲಿ ಸರ್ಕಾರದಿಂದ ದೊರೆತಿರುವ ನೆರವು ಹಾಗೂ ಸೌಲಭ್ಯಗಳ ವಿವರವನ್ನು **ಅನುಬಂಧದಲ್ಲಿ** ಒದಗಿಸಿದೆ. |

**Horti 177 HGM 2021**

**(ಆರ್.ಶಂಕರ್)**
**ತೋಟಗಾರಿಕೆ ಮತ್ತು**
**ರೇಷ್ಮೆ ಸಚಿವರು**

## ಅನುಬಂಧ

### ಜಿಲ್ಲೆಯಲ್ಲಿನ ನೊಂದಾಯಿತ ಜೇನು ಕೃಷಿಕರಿಗೆ ಕಳೆದ ಮೂರು ವರ್ಷಗಳಲ್ಲಿ ಸರ್ಕಾರದಿಂದ ದೊರೆತಿರುವ ನೆರವು ಹಾಗೂ ಸೌಲಭ್ಯಗಳ ವಿವರ

1. ಮಧುವನ ಮತ್ತು ಜೇನುಸಾಕಾಣಿ ಯೋಜನೆ - ರಾಜ್ಯವಲಯ

| ಕ್ರ.ಸಂ | ಕಾರ್ಯಕ್ರಮ | 2018-19 | | 2019-20 | | 2020-21 | | ಒಟ್ಟು | |
|---|---|---|---|---|---|---|---|---|---|
| | | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ (ಸಂಖ್ಯೆ) | ಆರ್ಥಿಕ (ರೂ.ಲಕ್ಷಗಳಲ್ಲಿ) |
| i | ತರಬೇತಿ ಕಾರ್ಯಕ್ರಮ | 90 | 0.540 | 150 | 1.200 | 90 | 0.480 | 330 | 2.220 |
| ii | ಜೇನು ಪೆಟ್ಟಿಗೆ, ಕುಟುಂಬ ಮತ್ತು ಸ್ಟ್ಯಾಂಡ್ ಖರೀದಿಗೆ ಸಹಾಯಧನ | 180 | 3.240 | 806 | 27.204 | 496 | 12.555 | 1482 | 42.999 |
| iii | ಖಾಸಗಿ ಮಧುವನಗಳ ಸ್ಥಾಪನೆಗೆ ಸಹಾಯಧನ | 3 | 1.500 | 9 | 6.750 | 8 | 5.865 | 20 | 14.115 |
| iv | ಭಾಗಮಂಡಲದಲ್ಲಿ ಮೂರು ತಿಂಗಳ ವಸತಿ ಸಹಿತ ತರಬೇತಿ | 20 | 2.460 | 11 | 2.000 | | | 31 | 4.460 |

2. ಜೇನುಸಾಕಾಣಿಕೆ ಯೋಜನೆ- ಜಿಲ್ಲಾವಲಯ

| ಕ್ರ.ಸಂ | ಕಾರ್ಯಕ್ರಮ | 2018-19 | | 2019-20 | | 2020-21 | | ಒಟ್ಟು | |
|---|---|---|---|---|---|---|---|---|---|
| | | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ (ಸಂಖ್ಯೆ) | ಆರ್ಥಿಕ (ರೂ.ಲಕ್ಷಗಳಲ್ಲಿ) |
| i | ತರಬೇತಿ ಕಾರ್ಯಕ್ರಮ | 165 | 1.304 | 204 | 1.632 | 270 | 2.160 | 639 | 5.096 |
| ii | ಜೇನು ಪೆಟ್ಟಿಗೆ, ಕುಟುಂಬ ಮತ್ತು ಸ್ಟ್ಯಾಂಡ್ ಖರೀದಿಗೆ ಸಹಾಯಧನ | 310 | 6.767 | 245 | 8.532 | 328 | 10.895 | 883 | 26.193 |

3. ರಾಷ್ಟ್ರೀಯ ತೋಟಗಾರಿಕೆ ಮಿಷನ್ (MIDH) - ಕೇಂದ್ರವಲಯ

| ಕ್ರ.ಸಂ | ಕಾರ್ಯಕ್ರಮ | 2018-19 | | 2019-20 | | 2020-21 | | ಒಟ್ಟು | |
|---|---|---|---|---|---|---|---|---|---|
| | | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ | ಭೌತಿಕ (ಸಂಖ್ಯೆ) | ಆರ್ಥಿಕ (ರೂ.ಲಕ್ಷಗಳಲ್ಲಿ) |
| i | ಜೇನು ಪೆಟ್ಟಿಗೆ ಮತ್ತು ಕುಟುಂಬ ಖರೀದಿಗೆ ಸಹಾಯಧನ | 815 | 13.080 | 681 | 10.896 | 856 | 13.696 | 2352 | 37.672 |
| ii | ಜೇನು ತೆಗೆಯುವ ಯಂತ್ರ ಖರೀದಿಗೆ ಸಹಾಯಧನ | 7 | 0.140 | 12 | 0.360 | 10 | 0.200 | 29 | 0.700 |

ನಿರ್ದೇಶಕರು